ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಬೆಲೀಕೇರಿ ಬಂದರು ನಿರ್ವಹಣೆ ಬಗ್ಗೆ

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ):-

169 (271) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಉತ್ತರ ಕನ್ನಡ ಜಿಲ್ಲೆ ಅಂಕೋಲಾದಲ್ಲಿನ ಬೇಲಿಕೇರಿ ಬಂದರು ಪ್ರದೇಶದಲ್ಲಿ ನಿರ್ವಹಣೆ ಕೊರತೆಯಿಂದಾಗಿ ಫ್ಲಾಟ್ ಫಾರ್ಮ್ ಇಲ್ಲದೇ ಮಹಿಳೆಯರು ಮೀನು ಒಣಗಿಸಲಾಗದೆ ಪ್ರತಿನಿತ್ಯ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ಈ ಬಂದರು ನಿರ್ವಹಣೆಗೆ ಸರ್ಕಾರ ತೆಗೆದುಕೊಂಡ ಕ್ರಮವೇನು ;

(ಇ) ಲಾಕ್‌ಡೌನ್ ಸಮಯದಲ್ಲಿ ಮೀನುಗಾರರ ರಕ್ಷಣೆ ಮಾಡಬೇಕಾದದ್ದು ಸರ್ಕಾರದ ಕರ್ತವ್ಯವಾಗಿದ್ದು, ಅವರ ಜೀವನ ನಿರ್ವಹಣೆಗೆ ಸರ್ಕಾರದ ಮಟ್ಟದಲ್ಲಿ ಕೈಗೊಂಡ ಕ್ರಮಗಳೇನು;

(ಈ) ಮೀನುಗಾರರು ಈ ಕ್ಲಿಷ್ಟಕರ ಸನ್ನಿವೇಶವಾದ ಕೋವಿಡ್-19ರ ಸಮಯದಲ್ಲಿ ಉದ್ಯೋಗವಿಲ್ಲದೇ ಕಷ್ಟಪಡುತ್ತಿದ್ದು, ಇವರಿಗೆ ಉದ್ಯೋಗ ಭದ್ರತೆ ನೀಡುವಲ್ಲಿ ಸರ್ಕಾರವು ಕ್ರಮವಹಿಸಿದೆಯೇ; ಹಾಗಿದ್ದಲ್ಲಿ, ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ ? (ಪೂರ್ಣ ಮಾಹಿತಿ ನೀಡುವುದು)